# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯ <br> Volume 149 | ಬೆಂಗಳೂರು, ಗುರುವಾರ, ಆಗಸ್ಟ್ ೭, ೨೦೧೪ (ಶ್ರಾವಣ ೧೬, ಶಕ ವರ್ಷ ೧೯೩೬) <br> Bangalore, Thursday, August 7, 2014 (Shravana 16, Shaka Varsha 1936) | ಸಂಚಿಕೆ ೩೨ <br> Issue 32 |
|---|---|---|

## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**FORM IV**

**(See Rule 12)**

**NOTICE**

It is hereby notified that the undersigned has changed his/her name from **PARASAPPA S/o MALLAPPA MADAR to PARASAPPA S/o MALLAPPA HOSAMANI.**

**PD C/n- 92**
**SC-10**

**PARASAPPA S/o MALLAPPA HOSAMANI.**

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ, ಮಂಡ್ಯ**

**ಅಧಿಸೂಚನೆ**

**ಸಂಖ್ಯೆಃಎಡಿಎಂಎನ್./ಡಿ.ಆರ್./01/2014 ದಿನಾಂಕಃ 28.06.2014**

**ವಿಷಯಃ** ಹಿಂಬಾಕಿ ಇರುವ ಮತ್ತು ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗಳಿಗೆ ನೇಮಕಾತಿ ಬಗ್ಗೆ.

**ಉಲ್ಲೇಖಃ**

1. ಈ ಕಛೇರಿಯ ಅಧಿಸೂಚನೆ ಸಂಖ್ಯೆಃ ಎಡಿಎಂಎನ್. 01/2011, ದಿನಾಂಕಃ 21.11.2011 ರನ್ವಯ ಉಳಿದಿರುವ ಶೀಘ್ರಲಿಪಿಗಾರರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು.
2. ಸರ್ಕಾರಿ ಆದೇಶ ಸಂಖ್ಯೆಃ LAW 230 LCE 2010 ಬೆಂಗಳೂರು, ದಿನಾಂಕಃ 29.03.2011.
3. ಸರ್ಕಾರಿ ಆದೇಶ ಸಂಖ್ಯೆಃ LAW 186 LAC 2011 ಬೆಂಗಳೂರು, ದಿನಾಂಕಃ 21.09.2011.
4. ಸರ್ಕಾರಿ ಆದೇಶ ಸಂಖ್ಯೆಃ LAW 112 LCE 2012 ಬೆಂಗಳೂರು, ದಿನಾಂಕಃ 28.12.2012.
5. ಮಾನ್ಯ ಉಚ್ಛ ನ್ಯಾಯಾಲಯದ ಪತ್ರ ಸಂಖ್ಯೆಃ LCA-II 36/2003, ದಿನಾಂಕಃ 23.06.2011.
6. ಮಾನ್ಯ ಉಚ್ಛ ನ್ಯಾಯಾಲಯದ ಪತ್ರ ಸಂಖ್ಯೆಃ LCA-II 54/2011, ದಿನಾಂಕಃ 01.10.2011.
7. ಮಾನ್ಯ ಉಚ್ಛ ನ್ಯಾಯಾಲಯದ ಪತ್ರ ಸಂಖ್ಯೆಃ LCA-II 128/2012, ದಿನಾಂಕಃ 21.01.2013.

ಮೇಲ್ಕಂಡ ಅಧಿಸೂಚನೆಯ ಅನ್ವಯ ಮಂಡ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಹಾಗೂ ಅಧೀನ ನ್ಯಾಯಾಲಯಗಳಲ್ಲಿ ಹಿಂಬಾಕಿ ಇರುವ ಮತ್ತು ಖಾಲಿ ಇರುವ ಶೀಘ್ರಲಿಪಿಗಾರರು–14 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅಧಿಸೂಚನೆಯಲ್ಲಿ ಲಗತ್ತಿಸಿರುವ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕಃ 16.08.2014 ರ ಸಂಜೆ 04.00 ಗಂಟೆಯ ಒಳಗೆ**

1) **ಶೀಘ್ರಲಿಪಿಗಾರರುಃ**

**ಎ) ಹುದ್ದೆಗಳ ಸಂಖ್ಯೆಃ** 14

**ಬಿ) ವೇತನ ಶ್ರೇಣಿಃ** 14550–350–15600–400–17200–450–19000– 500–21000–600–24600–700–26700– **ಇತರೆ ಭತ್ಯೆಗಳೊಂದಿಗೆ.**

ಸಿ) ಹುದ್ದೆಗಳ ವರ್ಗೀಕರಣ ಃ

| ವರ್ಗೀಕರಣ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಒಟ್ಟು |
|---|---|---|---|---|---|
| ಸಾಮಾನ್ಯ ಅಭ್ಯರ್ಥಿ | 02 | 02 | 02 | 01 | 07 |
| ಪರಿಶಿಷ್ಟ ಜಾತಿ | – | 01 | 01 | – | 02 |
| ಪ್ರವರ್ಗ–2ಎ | 01 | 01 | 01 | – | 03 |
| **ಪ್ರವರ್ಗ–3ಎ** | – | 01 | – | – | 01 |
| **ಪ್ರವರ್ಗ–3ಬಿ** | – | 01 | – | – | 01 |
| **ಒಟ್ಟು** | **03** | **06** | **04** | **01** | **14** |

**ವಿದ್ಯಾರ್ಹತೆಃ**

1. ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
2. ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಶೀಘ್ರಲಿಪಿ ಪ್ರೌಢ ದರ್ಜೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
3. ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಬೆರಳಚ್ಚು ಪ್ರೌಢ ದರ್ಜೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ಸೂಚನೆಗಳುಃ**

1. ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕಃ 16.08.2014 ರಂದು ಸಂಜೆ 04.00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಒಂದು ವೇಳೆ ಕಡೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿದ್ದ ಪಕ್ಷದಲ್ಲಿ ಮುಂದಿನ ಕೆಲಸದ ದಿನ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗಿರುತ್ತದೆ.
2. **ಭರ್ತಿ ಮಾಡಿದ ಅರ್ಜಿಯನ್ನು ಈ ಕೆಳಕಂಡ ವಿಳಾಸಕ್ಕೆ ಸಲ್ಲಿಸುವುದು.**

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ.**

**I. ವಯೋಮಿತಿಃ**

ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರಬೇಕು.

| | |
|---|---|
| 1 | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ 40 ವರ್ಷ ವಯಸ್ಸು ಮೀರಿರಬಾರದು. |
| 2 | ಪ್ರವರ್ಗ 2–ಎ, 2–ಬಿ, 3–ಎ ಹಾಗೂ 3–ಬಿ ಗೆ ಸೇರಿದ ಅಭ್ಯರ್ಥಿಗಳಿಗೆ 38 ವರ್ಷ ವಯಸ್ಸು ಮೀರಿರಬಾರದು. |
| 3 | ಸಾಮಾನ್ಯ ಅಭ್ಯರ್ಥಿಗಳಿಗೆ 35 ವರ್ಷ ವಯಸ್ಸು ಮೀರಿರಬಾರದು. |
| 4 | ಅಂಗವಿಕಲರಿಗೆ ಹಾಗೂ ವಿಧವಾ ಮಹಿಳೆಯರಿಗೆ ವಯೋಮಿತಿಯಲ್ಲಿ 10 ವರ್ಷಗಳ ಸಡಿಲಿಕೆ ಇರುತ್ತದೆ. |
| 5 | ಮಾಜಿ ಸೈನಿಕ ಅಭ್ಯರ್ಥಿಯು ಅವರ ವರ್ಗಕ್ಕೆ ನಿಗಧಿಪಡಿಸಿರುವ ಗರಿಷ್ಠ ವಯೋಮಿತಿಯ ಜೊತೆಗೆ ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವರೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. |

**II. ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳು.**

1. ಸೈನಿಕ ಸೇವೆಯಿಂದ ಬಿಡುಗಡೆಯಾದ ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲು ಪ್ರತಿಯನ್ನು ಸಲ್ಲಿಸತಕ್ಕದ್ದು.
2. ಜಾತಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಯಲ್ಲಿ ತಹಸಿಲ್ದಾರರಿಂದ ಪಡೆದಿರುವ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲು ಪ್ರತಿಯನ್ನು ಸಲ್ಲಿಸತಕ್ಕದ್ದು.
3. ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ತಹಸಿಲ್ದಾರ್‌ರವರಿಂದ ಪಡೆದ ಪ್ರಮಾಣ ಪತ್ರ, ಗ್ರಾಮೀಣ ಮೀಸಲಾತಿ ಕೋರುವ ಇತರೆ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ–2 ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿಸಿರುವ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲು ಪ್ರತಿಯನ್ನು ಸಲ್ಲಿಸತಕ್ಕದ್ದು.
4. ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ದಿನಾಂಕಃ 19.05.2005 ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆಃಸಿಆಸುಇ/115/ ಸೇನೆನಿ/2005 ರಡಿಯಲ್ಲಿ ನಿಗಧಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದ ಸ್ವಯಂ ದೃಢೀಕೃತ ನಕಲು ಪ್ರತಿಯನ್ನು ಸಲ್ಲಿಸತಕ್ಕದ್ದು.
5. ವಿಧವೆಯರು ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲು ಪ್ರತಿಯನ್ನು ಸಲ್ಲಿಸತಕ್ಕದ್ದು.
6. ಯೋಜನಾ ನಿರಾಶ್ರಿತ ಅಭ್ಯರ್ಥಿಯು ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 23 ಸೆನೆನ 99, ದಿನಾಂಕ 23.11.2000ರ ಅನ್ವಯ ಯೋಜನೆಗಳಿಂದ ನಿರ್ವಸತಿತರಾದ (ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸತಿತರಾದ ಕುಟುಂಬದ ಅಭ್ಯರ್ಥಿಗಳು ಈ ಮೀಸಲಾತಿಗೆ ಅನ್ವಯವಾಗುವುದಿಲ್ಲ.) ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಸಿಲ್ದಾರ್‌ರವರಿಂದ ನಿಗದಿತ ನಮೂನೆಯಲ್ಲಿ ಪಡೆದ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲು ಪ್ರತಿಯನ್ನು ಸಲ್ಲಿಸತಕ್ಕದ್ದು.

**III. ಆಯ್ಕೆ ವಿಧಾನ:**

ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ) (ನೇಮಕಾತಿ) (ತಿದ್ದುಪಡಿ) ನಿಯಮ 2007 ಮತ್ತು ಸಂಬಂಧಪಟ್ಟ ಇತರೆ ನಿಯಮಾವಳಿಗಳ ಪ್ರಕಾರ ನಡೆಸಲಾಗುವುದು.

**ಶೀಘ್ರಲಿಪಿಗಾರರ ಹುದ್ದೆಗೆ:**

1. ಅಭ್ಯರ್ಥಿಯು ಪ್ರತಿ ನಿಮಿಷಕ್ಕೆ 120 ಶಬ್ಧಗಳಂತೆ ಸುಮಾರು 05 ನಿಮಿಷಗಳಲ್ಲಿ ನೀಡುವ ಉಕ್ತಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವುದು. ಅದನ್ನು ಲಿಪ್ಯಂತರಗೊಳಿಸಿ, ಬೆರಳಚ್ಚು ಮಾಡಲು 45 ನಿಮಿಷಗಳ ಕಾಲಾವಕಾಶ ನೀಡಲಾಗುವುದು. ಇದಕ್ಕೆ 100 ಗರಿಷ್ಠ ಅಂಕಗಳನ್ನು ನಿಗಧಿಪಡಿಸಿದ್ದು ಸಂದರ್ಶನಕ್ಕೆ ಅರ್ಹತೆ ಹೊಂದಲು ಕನಿಷ್ಠ 50 ಅಂಕಗಳನ್ನು ಪಡೆದಿರಬೇಕು. ಅಭ್ಯರ್ಥಿಯು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ, ಹಿರಿಯ ದರ್ಜೆ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಹಾಗೂ ಹಿರಿಯ ದರ್ಜೆ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಪರೀಕ್ಷೆಗಳಲ್ಲಿ ಮತ್ತು ಈ ಪ್ರಾಧಿಕಾರ ನಡೆಸಲಾದ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಸರಾಸರಿ ಆಧಾರದ ಮೇಲೆ ಒಂದು ಹುದ್ದೆಗೆ 5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು. ಸಂದರ್ಶನಕ್ಕೆ ಒಟ್ಟು 5 ಅಂಕಗಳನ್ನು ನಿಗಧಿಪಡಿಸಲಾಗಿರುತ್ತದೆ. ಅಭ್ಯರ್ಥಿಯು ಹುದ್ದೆಗೆ ನಿಗಧಿಪಡಿಸಲಾದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳು, ಈ ಪ್ರಾಧಿಕಾರವು ನಡೆಸಲಾದ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ಪಡೆದ ಅಂಕಗಳು ಮತ್ತು ಸಂದರ್ಶನದಲ್ಲಿ ಪಡೆದ ಅಂಕಗಳ ಆಧಾರದ ಮೇರೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಕೆಳಕಂಡ ದಾಖಲಾತಿಗಳ ದೃಢೀಕೃತ ನಕಲುಗಳನ್ನು ಸಲ್ಲಿಸಬೇಕು. ತಪ್ಪಿದಲ್ಲಿ ಯಾವ ಸೂಚನೆಯನ್ನು ನೀಡದೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

1. ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಸ್ವಂತ ಕೈ ಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.
2. ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ನಮೂನೆಗಳಲ್ಲಿ ಅರ್ಜಿಯನ್ನು ಸಲ್ಲಿಸತಕ್ಕದ್ದು.
3. ಹುಟ್ಟಿದ ದಿನಾಂಕವನ್ನು ತೋರಿಸುವ ಬಗ್ಗೆ ದೃಢೀಕೃತ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
4. ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಸ್ಥಳದಲ್ಲಿ ಅಂಟಿಸಿ, ಅದರ ಮೇಲೆ ಸಹಿ ಮಾಡತಕ್ಕದ್ದು.
5. ಅರ್ಜಿ ನಮೂನೆಯೊಂದಿಗೆ ಯಾವುದೇ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ. ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರೆ ಪ್ರಮಾಣ ಪತ್ರಗಳನ್ನು ಸ್ವಯಂ ಧೃಢೀಕರಿಸಿ ಅರ್ಜಿಗೆ ಲಗತ್ತಿಸತಕ್ಕದ್ದು.
6. ಅಭ್ಯರ್ಥಿಗಳು ಅರ್ಜಿಯೊಂದಿಗೆ ಅವರ ನಡತೆ ಬಗ್ಗೆ ಅವರ ಸಂಬಂಧಿಕರಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಆರು ತಿಂಗಳ ಒಳಗೆ ಪಡೆದ ದಿನಾಂಕ ನಮೂದಿಸಿರುವ ಎರಡು ನಡತೆ ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ ಅಥವಾ ಕಾಲೇಜಿನಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.
7. ಜಾತಿ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಕೊನೆಯ ದಿನಾಂಕಕ್ಕೆ ಚಾಲ್ತಿಯಲ್ಲಿರುವ ತಹಸಿಲ್ದಾರ್‌ರವರಿಂದ ಪಡೆದ ಜಾತಿ ಮತ್ತು ಆದಾಯ ಪ್ರಮಾಣ ಪತ್ರದ ದೃಢೀಕೃತ ನಕಲನ್ನು ಲಗತ್ತಿಸತಕ್ಕದ್ದು.
8. ಅಭ್ಯರ್ಥಿಗಳು ಅರ್ಜಿಯ ಜೊತೆಯಲ್ಲಿ 06-00 (ಆರು ರೂಪಾಯಿ) ರೂ.ಗಳ ಅಂಚೆ ಚೀಟಿ ಲಗತ್ತಿಸಿರುವ ಸ್ವವಿಳಾಸವಿರುವ ಲಕೋಟೆಯನ್ನು ಲಗತ್ತಿಸತಕ್ಕದ್ದು ಹಾಗೂ ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ನಮೂದಿಸತಕ್ಕದ್ದು.
9. ಅಭ್ಯರ್ಥಿಯು ಯಾವುದೇ ವರ್ಗದಲ್ಲಿ ಮೀಸಲಾತಿ ಕೋರಿದಲ್ಲಿ ಆಯಾ ಮೀಸಲಾತಿಗೆ ಸಂಬಂಧಿಸಿದ ನಿಗದಿತ ನಮೂನೆಯಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರದ ದೃಢೀಕೃತ ನಕಲನ್ನು ಲಗತ್ತಿಸತಕ್ಕದ್ದು.

**ಸಾಮಾನ್ಯ ಸೂಚನೆಗಳು:**

1. ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಅಥವಾ ಪ್ರಭಾವ ಬೀರುವ ಅಂಶಗಳು ಕಂಡುಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.
2. ಎಲ್ಲಾ ವಿವರಗಳನ್ನು ನೀಡದ ಹಾಗೂ ಅಪೂರ್ಣವಾದ ಅರ್ಜಿಗಳನ್ನು ಪ್ರಾರಂಭಿಕ ಹಂತದಲ್ಲಿಯೇ ತಿರಸ್ಕರಿಸಲಾಗುವುದು.
3. ಅಪೂರ್ಣವಾಗಿರುವ ಸಹಿ ಮಾಡದ ಹಾಗೂ ವಿದ್ಯಾರ್ಹತೆ, ಮೀಸಲಾತಿ ಮತ್ತು ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
4. ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚ್ಛಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.
5. ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು ಹಾಗೂ ಸಂಬಂಧಪಟ್ಟ ಎಲ್ಲಾ ಮೂಲ ದಾಖಲಾತಿಗಳನ್ನು ಸಂದರ್ಶನದ ಕಾಲಕ್ಕೆ ಹಾಜರುಪಡಿಸತಕ್ಕದ್ದು.
6. ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಅನರ್ಹರೆಂದು ತಿಳಿಯತಕ್ಕದ್ದು ಹಾಗೂ ಈ ಬಗ್ಗೆ ಈ ಕಛೇರಿಯಿಂದ ಯಾವುದೇ ಪತ್ರ ವ್ಯವಹಾರಗಳನ್ನು ನಡೆಸಲಾಗುವುದಿಲ್ಲ.

**ಚಂದ್ರಶೇಖರ ಪಾಟೀಲ್**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಅರ್ಜಿ ನಮೂನೆ**

**ಶೀಘ್ರಲಿಪಿಗಾರರ ಹುದ್ದೆಗೆ ಅರ್ಜಿ**

**ಸ್ವದೃಢೀಕರಿಸಿದ ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರವನ್ನು ಅಂಟಿಸಬೇಕು.**

ರವರಿಗೆ,

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ.

ಮಾನ್ಯರೇ,

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆಃ ಎಡಿಎಂಎನ್./ಡಿ.ಆರ್.1/2014, ದಿನಾಂಕಃ 28.06.2014 ರ ಪ್ರಕಟಣೆ ಮೇರೆಗೆ ನಾನು ಕೆಳಕಂಡ ಮಾಹಿತಿಗಳೊಂದಿಗೆ ______________ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | | | | | |
|---|---|---|---|---|---|---|
| **1.** | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | | | |
| **2.** | ತಂದೆ/ತಾಯಿ/ಗಂಡನ ಹೆಸರು | | | | | |
| **3.** | ಲಿಂಗ | | | | | |
| **4.** | ಹುಟ್ಟಿದ ದಿನಾಂಕ ಮತ್ತು ವಯಸ್ಸು | | | | | |
| **5.** | ಖಾಯಂ ವಿಳಾಸ | | | | | |
| **6.** | ತಾತ್ಕಾಲಿಕ ವಿಳಾಸ (ಇದ್ದಲ್ಲಿ) | | | | | |
| **7.** | ಶೈಕ್ಷಣಿಕ ವಿದ್ಯಾರ್ಹತೆ | ವಿದ್ಯಾರ್ಹತೆ ಹೊಂದಿದ ಊರು/ಸ್ಥಳ | ಉತ್ತೀರ್ಣರಾದ ವರ್ಷ | ಗರಿಷ್ಠ ಅಂಕಗಳು | ಪಡೆದ ಅಂಕಗಳು | ಶೇಕಡವಾರು ಅಂಕಗಳು |
| | ಎಸ್.ಎಸ್.ಎಲ್.ಸಿ. | | | | | |
| | ಕನ್ನಡ ಬೆರಳಚ್ಚು ಹಿರಿಯ ಶ್ರೇಣಿ | | | | | |
| | ಆಂಗ್ಲ ಬೆರಳಚ್ಚು ಹಿರಿಯ ಶ್ರೇಣಿ | | | | | |
| | ಕನ್ನಡ ಶೀಘ್ರಲಿಪಿ ಹಿರಿಯ ಶ್ರೇಣಿ | | | | | |
| | ಆಂಗ್ಲ ಶೀಘ್ರಲಿಪಿ ಹಿರಿಯ ಶ್ರೇಣಿ | | | | | |
| | ಇತರೆ ವಿದ್ಯಾರ್ಹತೆ ಅಥವಾ ತರಬೇತಿ ಇದ್ದಲ್ಲಿ | | | | | |
| **8.** | ಅಭ್ಯರ್ಥಿಯು ಪ.ಜಾ., ಪ.ಪಂ., ಪ್ರವರ್ಗ–1, 2ಎ, 2ಬಿ, 3ಎ ಮತ್ತು 3ಬಿ ವರ್ಗಕ್ಕೆ ಸೇರಿದ್ದಲ್ಲಿ ಜಾತಿ ಪ್ರಮಾಣ ಪತ್ರದ ನಕಲನ್ನು ಲಗತ್ತಿಸತಕ್ಕದ್ದು. ಈ ವರ್ಗಕ್ಕೆ ಸೇರದಿದ್ದಲ್ಲಿ ಸಾಮಾನ್ಯ ಅಭ್ಯರ್ಥಿ ಎಂದು ನಮೂದಿಸತಕ್ಕದ್ದು | | | | | |
| **9.** | ಅಭ್ಯರ್ಥಿಯು ಗ್ರಾಮೀಣ/ ಮಾಜಿ ಸೈನಿಕ/ ಅಂಗವಿಕಲ/ ಯೋಜನೆಗಳಿಂದ ನಿರಾಶ್ರಿತ ಗೊಂಡ/ ಕನ್ನಡ ಮಾಧ್ಯಮಕ್ಕೆ ಸೇರಿದವರೇ? ಹಾಗಿದ್ದಲ್ಲಿ ಸಂಬಂಧಪಟ್ಟ ಪ್ರಮಾಣ ಪತ್ರದ ನಕಲನ್ನು ಲಗತ್ತಿಸತಕ್ಕದ್ದು. | | | | | |
| **10.** | ಯಾವುದಾದರೂ ಅಪರಾಧಗಳ ಶಿಕ್ಷೆಗೆ ಒಳಪಟ್ಟಿರುತ್ತೀರಾ? | | | | | |

**ಸೂಚನೆಃ** ಅಭ್ಯರ್ಥಿಗಳು ಎಲ್ಲಾ ಕಾಲಂಗಳನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು.

ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿದೆ ಎಂದು ಪ್ರಮಾಣೀಕರಿಸುತ್ತೇನೆ. ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡುಬಂದಲ್ಲಿ ನನ್ನ ಅರ್ಜಿಯನ್ನು ರದ್ದುಪಡಿಸಬಹುದು ಎಂದು ಈ ಮೂಲಕ ಘೋಷಿಸುತ್ತೇನೆ.

**ಸ್ಥಳಃ**

**ದಿನಾಂಕಃ** **ಅಭ್ಯರ್ಥಿಯ ಸಹಿ.**

**PR. 72** **ಚಂದ್ರಶೇಖರ ಪಾಟೀಲ್**

**SC.5** ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ.

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59